ಡಾ॥ ಅ. ಸುಂದರ

# ಸನ್ನತಿಯ ಎರಡು ಗಮನಾರ್ಹ ಶಿಲ್ಪಗಳು

ಕಪಟರಾಳ ಕೃಷ್ಣರಾವ್ ಅವರಿಂದ ಮೊದಲು ಗಮನಿಸಲ್ಪಟ್ಟು[1], ಅನಂತರ ಮರೆತುಹೋಗಿದ್ದ ಸನ್ನತಿಯ ಜನವಸತಿಯಿದ್ದ ಪ್ರಾಕ್ಚಾರಿತ್ರಿಕ ಎಡೆಯನ್ನು ಎಸ್. ನಾಗರಾಜು ಅವರು ಮರುಶೋಧಿಸಿ (೧೯೬೪) ಬೌದ್ಧಮೂರ್ತಿ, ಆಲಂಕಾರಿಕ ಪಟ್ಟಿಕೆ, ಶಾಸನ, ಪ್ರಾಚೀನ ಅವಶೇಷ ಸಂಪುಟ ಹಾಗೂ ಇಟ್ಟಿಗೆಯಲ್ಲಿ ನಿರ್ಮಾಣಗೊಂಡ ವಿಶಾಲ ಕೋಟೆಗಳನ್ನು ಬೆಳಕಿಗೆ ತಂದನಂತರವೂ ಇಲ್ಲಿಯ ಕೆಲವು ಗಮನಾರ್ಹ ಪ್ರಾಚೀನ ಶಿಲ್ಪಾವಶೇಷಗಳು ಮತ್ತು ಶಾಸನಗಳನ್ನು ಕುರಿತ ಬರಹಗಳನ್ನು ಪ್ರಕಟಿಸಲಾಗಿದೆ.[2] ೧೯೮೬ರಲ್ಲಿ ಸ್ತೂಪ ಮತ್ತು ಜನವಸತಿಯಿದ್ದ ಎಡೆಯ ಭಾಗವೊಂದರ ಉತ್ಖನನ ಕೈಗೊಳ್ಳಲಾಗಿದೆ.[3]

೧೯೮೬ರಲ್ಲಿ ರಾಜ್ಯ ಪುರಾತತ್ತ್ವ ಮತ್ತು ವಸ್ತುಸಂಗ್ರಹಾಲಯ ಇಲಾಖೆಯ ನಿರ್ದೇಶಕನಾಗಿದ್ದು, ಗುಲ್ಬರ್ಗಾದ ಸರ್ಕಾರಿ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿ ಪ್ರದರ್ಶಿಸಲಾಗಿರುವ ಸನ್ನತಿಯ ನಿವೇಶನದಲ್ಲಿ ದೊರೆತ ಶಿಲ್ಪಾವಶೇಷಗಳ ಅಧ್ಯಯನವನ್ನು ನಾನು ಕೈಗೊಂಡಿದ್ದ ಸಂದರ್ಭದಲ್ಲಿ, ಅಲ್ಲಿಯ ಎರಡು ಶಿಲ್ಪಾವಶೇಷಗಳು ನನ್ನ ಗಮನ ಸೆಳೆದವು. ಅವುಗಳೆಂದರೆ, ಉದರ ಮತ್ತು ಸೊಂಟದ ಭಾಗಗಳನ್ನು ಮಾತ್ರ ಉಳ್ಳ ಏಕಶಿಲಾ ಯಕ್ಷನ(?) ತುಂಡು ಅವಶೇಷ ಮತ್ತು ಅಪರೂಪದ ಶೈಲಿಯ ಮಿಥುನ (ದಂಪತಿ) ಶಿಲ್ಪದ ಒಡೆದ ಭಾಗ. ಇವೆರಡೂ ಪೂರ್ಣ ಉಬ್ಬಿನಾಕಾರದ ಶಿಲ್ಪಗಳು. ಈಗಾಗಲೇ ಗಮನಿಸಲಾಗಿರುವ ಬೌದ್ಧ ಶಿಲ್ಪಾವಶೇಷಗಳಲ್ಲಿ ಅವಶೇಷ ಸಂಪುಟ, ಬುದ್ಧಪಾದ, ಬೌದ್ಧ ಕತೆ

---

1 ಕರ್ನಾಟಕ ಸಂಸ್ಕೃತಿಯ ಸಂಶೋಧನೆ (ಲೇಖನಗಳ ಸಂಗ್ರಹ), ಮೈಸೂರು, ೧೯೭೦ : 'ಶ್ರೀ ಚಂದ್ರಕಲಾ ಪರಮೇಶ್ವರಿ'

2 M. Sheshadri : 'Buddhist Monuments in Sannati', *The Quarterly Journal of the Mythic Society*, Vol. LVI, Nos· 1 to 4, 1965, pp. 35-37 ; 'Buddhist Monuments in Mysore', *Artibus Asiae,* Vol. XXXIV, No. 213, 1972, pp. 169-170

P.B. Desai : 'A New Buddhist Centre', *Journal of Karnataka University (Social Sciences)*, Vol. IV, 1968, pp. 3-8

M. S· Nagaraja Rao (Ed.) : *Progress of Archaeology in Karnataka (1956-72)*, Mysore, 1978, pp. 35-36 : 'Brahmi Inscriptions and their bearing on the Great Stupa at Sannati', *Indian Epigraphy : its bearing on the History of Art,* Varanasi, 1985, pp. 41-45 ; 'Sculptural Art in Sannati', *Kusumanjali* (C. Sivarama Murti Commemoration Volume), New Delhi, 1985

3 A. Sundara : 'Excavations in Sannati–1986-87', *Puratattva,* Vol· 17, 1987

ಗಳನ್ನು ಬಿಂಬಿಸುವ ಅಲಂಕಾರಿಕ ಪಟ್ಟಿಕೆಗಳು ಹಾಗೂ ವಿನೋದದಲ್ಲಿರುವ ದಾನಿ–ದಂಪತಿಗಳನ್ನು ಬಿಂಬಿಸುವ ಶಾಸನ ಸಹಿತವಾದ ಅಲಂಕಾರಿಕ ಪಟ್ಟಿಕೆಗಳು, ಪೂರ್ಣ ಉಬ್ಬಿನಾಕಾರದ ಕುಬ್ಜಯಕ್ಷರು, ರೆಕ್ಕೆಯುಳ್ಳ ಕುದುರೆ ಮತ್ತಿತರ ಪ್ರಾಣಿ, ಇತ್ಯಾದಿಗಳು ಸರ್ವಶ್ರುತವಾಗಿವೆ. ಈಗ ಇಲ್ಲಿ ಗಮನಿಸಲಾಗಿರುವ ಎರಡು ಶಿಲ್ಪಗಳು ಗಾತ್ರದಲ್ಲಿ ಸಣ್ಣವಾದರೂ ವಸ್ತು ಮತ್ತು ವೈವಿಧ್ಯಗಳಲ್ಲಿ ಭಿನ್ನವೆನಿಸಿವೆ.

**ಯಕ್ಷ(?)ಶಿಲ್ಪ :** ಚಿತ್ರ ೧ರಲ್ಲಿ ಕಾಣುವುದು ವಾಸ್ತವವಾಗಿಯೂ ಏಕಶಿಲಾ ಯಕ್ಷನ ತುಂಡು ಶಿಲ್ಪ. ಇದರ ಉದರ ಮತ್ತು ಸೊಂಟದ ಭಾಗವು ಮಾತ್ರ ಉಳಿದುಕೊಂಡಿದ್ದು, ಉದರದ ಭಾಗವು ಮುಕ್ಕಾಗಿದೆ. ಎದೆಯ ಮೇಲ್ಭಾಗ ಮತ್ತು ಮಧ್ಯತೊಡೆಯ ಕೆಳಭಾಗದ ಅವಶೇಷಗಳು ನಷ್ಟಗೊಂಡಿವೆ. ಆದರೂ ಈಗ ಉಳಿದಿರುವ ಅವಶೇಷವು ಈ ಶಿಲ್ಪವು ನಿಂತಿರುವ ಭಂಗಿಯಲ್ಲಿರುವುದನ್ನು ಖಚಿತಪಡಿಸುತ್ತದೆ. ಎಡಗೈಯನ್ನು ಸೊಂಟದ ಮೇಲೆ ಇರಿಸಿಕೊಂಡಂತೆ ಮೂಡಿಸಲಾಗಿದೆ. ಹಾಗೆಯೇ, ಶಿಲ್ಪವು ಕಟಿಬಂಧ ಸಹಿತವಾದ 'ಧೋತ್ರ'ವನ್ನು ಧರಿಸಿರುವಂತೆ ಬಿಡಿಸಿದ್ದು, ಪಾರ್ಶ್ವದಲ್ಲಿ ಇಳಿಬಿದ್ದಿರುವ ಕಟಿಬಂಧವು ನೆರಿಗೆಗಳಿಂದ ಕೂಡಿದೆ.

ಕಟಿಬಂಧವು ಜೋತುಬಿದ್ದಿರುವ ಗುಡಾಣದಂತಹ ಹೊಟ್ಟೆಗೆ ಕಟ್ಟು ಬಿಗಿದಿರುವಂತಿದೆ. ಬೊಜ್ಜು ದೇಹವು ಗಮನಸೆಳೆಯುವಂಥಾದ್ದು. ಹಸ್ತವು ಉಬ್ಬಿಕೊಂಡಿದೆಯಲ್ಲದೆ, ಬೆರಳುಗಳು ದಪ್ಪವಾಗಿವೆ ಹಾಗೂ ಉಗುರುಗಳನ್ನು ಸ್ಪಷ್ಟವಾಗಿ ಬಿಡಿಸಲಾಗಿದೆ. ಮುಂಬದಿಯಲ್ಲಿ ಕಾಣುವ ಧೋತ್ರವು ವಿಶಿಷ್ಟತೆ ರಹಿತವಾದ ಅಸ್ಪಷ್ಟ ನೆರಿಗೆಗಳಿಂದ ಕೂಡಿದೆ.

**ಮಿಥುನ (ದಂಪತಿ) ಶಿಲ್ಪ :** ಚಿತ್ರ ೨ರಲ್ಲಿ ಕಾಣುವುದು ದಾನಿ–ದಂಪತಿಗಳ ಶಿಲ್ಪವೆಂದು ವ್ಯಕ್ತಪಟ್ಟಿದ್ದು, ಭೂಷಣವಾಗಿ ಆರಾಮ ಭಂಗಿಯಲ್ಲಿ ನಿಂತಿರುವಂತೆ ಇದೆ. ಆದರೆ ಸ್ತ್ರೀಯನ್ನು ತೋರಿಸುವ ಭಾಗ ಮತ್ತು ಪುರುಷನ ಕುತ್ತಿಗೆಯ ಮೇಲ್ಭಾಗ, ಎಡಭುಜ, ಬಲಗೈ ಹಾಗೂ ಮೊಣಕಾಲಿನ ಕೆಳಭಾಗಗಳು ಒಡೆದು ಕಾಣೆಯಾಗಿವೆ. ಆದಾಗ್ಯೂ ಈ ಶಿಲ್ಪದ ಮೂಲ ಸ್ವರೂಪವನ್ನು ಈಗ ಲಭ್ಯವಿರುವ ಅವಶೇಷದಿಂದಲೇ ತಿಳಿದುಕೊಳ್ಳಬಹುದಾಗಿದೆ. ಪುರುಷನು ತನ್ನ ಬಲ ತೋಳನ್ನು ಸ್ತ್ರೀಯ ಸೊಂಟದ ಹಿಂಬದಿಯನ್ನು ಬಳಸಿಕೊಂಡು ಆಕೆಯ ಬಲಭುಜದ ಮೇಲೆ ಇರಿಸಿದಂತಿದೆ. ಹಾಗೆಯೇ, ಸ್ತ್ರೀಯು ಆಭರಣಯುಕ್ತವಾದ ಜೋಡಿಬಳೆಗಳನ್ನು ಧರಿಸಿದ ತನ್ನ ಎಡಗೈಯನ್ನು ಪುರುಷನ ಬೆನ್ನಿನ ಮೇಲೆ ನಾಜೂಕಾಗಿ ಇರಿಸಿದ್ದಾಳೆ. ಪುರುಷನ ಎದೆಯು ನಗ್ನವಾಗಿದೆ. ಆತನು ಕಟಿವಸ್ತ್ರಸಹಿತವಾದ ಧೋತ್ರವನ್ನು ಧರಿಸಿದ್ದು, ಅದು ಆಕರ್ಷಕ ನೆರಿಗೆಗಳಿಂದ ಕೂಡಿದೆ. ಆ ವಸ್ತ್ರವು ಮುಂಬದಿಯಲ್ಲಿ ಮಾಲೆಯಾಕಾರದಲ್ಲಿ ಜೋತುಬಿದ್ದಿದ್ದು, ಪಾರ್ಶ್ವದಲ್ಲಿ ಉದ್ದವಾಗಿ ಕುಣಿಕೆಗಳಿಂದ ಬಂಧಿಸಿದಂತೆ ಅಲಂಕರಿಸಲ್ಪಟ್ಟಿದೆ. ಬೆನ್ನುಹುರಿಯಲ್ಲಿ ಕಾಣುವ ಲಂಬರೇಖೆಯಲ್ಲಿಯ ತಗ್ಗು ಆತನು ಆರೋಗ್ಯವಂತನೂ ದೃಢಕಾಯನೂ ಆದವನೆಂಬುದನ್ನು ವ್ಯಕ್ತಪಡಿಸುತ್ತದೆ. ದುಂಡನೆಯ ಮತ್ತು ಆಳವಾದ ನಾಭಿಯುಳ್ಳ ಸಮತಟ್ಟಾದ ಉದರ ಮತ್ತು ದೇಹದ ವಿವಿಧ ಭಾಗಗಳು–ಅದರಲ್ಲೂ ಮುಖ್ಯವಾಗಿ ಪೃಷ್ಠಗಳು ಶಿಲ್ಪದ ನಿಲುವಿನ ಭಂಗಿಯ ಪ್ರಯುಕ್ತ ಲಾಸ್ಯಪ್ರಧಾನವಾಗಿ ತೋರುತ್ತವೆ. ಉಡುಪಿನ ಸರಳ ವಿನ್ಯಾಸದಿಂದಾಗಿ ಮನುಷ್ಯಾಕೃತಿಯ ಸಹಜ ಸೌಂದರ್ಯವು ಎದ್ದು ಕಾಣುವಂತಿದೆ.

ಶೈಲಿಯ ದೃಷ್ಟಿಯಿಂದ ಈ ಎರಡು ಶಿಲ್ಪಗಳೂ ಕ್ರಿ. ಶ. ೨ನೆಯ ಶತಮಾನದವು.

**ಕೆಲವು ವಿಚಾರಗಳು :** ಇತ್ತೀಚೆಗೆ ನಾನು ಕಾರವಾರ ಜಿಲ್ಲೆಯ ಹೈಗುಂದದಲ್ಲಿ ಪೂರ್ಣ ಉಬ್ಬಿನಾಕಾರದ ಏಕಶಿಲಾ ಯಕ್ಷನ ಶಿಲ್ಪವನ್ನು ಗಮನಿಸಿದ್ದೇನೆ.[4] ಈ ಹಿಂದೆಯೇ ಸನ್ನತಿಯಲ್ಲಿ ದೊರೆತ ಎರಡು ಅಥವಾ ಮೂರು ಯಕ್ಷ ಶಿಲ್ಪಗಳೂ ಬೆಳಕಿಗೆ ಬಂದಿವೆ.[5] ಆದರೆ

4 *Indian Archaeology, A Review*, Annual Report of the Archaeological Survey of India, 1973-74, p. 17, Plate XXXII ; 'ಇತ್ತೀಚಿನ ಕೆಲವು ಮುಖ್ಯ ಪುರಾತತ್ತ್ವ ಶೋಧನೆಗಳು', ಕರ್ನಾಟಕ ಭಾರತಿ, ಸಂಪುಟ ೮, ಸಂಚಿಕೆ ೨, ೧೯೭೫

5 P. B. Desai, 1968 ; M. S. Nagaraja Rao, 1985

ಇವು ತಲೆ ಇತ್ಯಾದಿ ಅಂಗಗಳಲ್ಲಿ ಹಣತೆಗಳನ್ನು ಧರಿಸಿರುವ ಭೃತ್ಯವೃತ್ತಿಯ ಕುಬ್ಜಯಕ್ಷರ ಶಿಲ್ಪಗಳು. ಈಗ ಇಲ್ಲಿ ಗಮನಿಸಲಾಗಿರುವ ಸನ್ನತಿಯ ಏಕಶಿಲಾ ಯಕ್ಷನ ಸಾಮಾನ್ಯ ಶಿಲ್ಪವು ಕುಬ್ಜಯಕ್ಷ ಶಿಲ್ಪದ ರೀತಿಯಲ್ಲಿದ್ದರೂ ಹೈಗುಂದದ ನಿರ್ದಿಷ್ಟಕಾಲದಲ್ಲಿ ಉಪಾಸನೆಗೆ ಬಳಸುವ ಶಿಲ್ಪದಂತೆಯೇ ಇದೆ. ಆದ್ದರಿಂದ ಕರ್ನಾಟಕದ ಈ ಭಾಗದಲ್ಲಿ ಕ್ರಿಸ್ತಶಕಾರಂಭದ ಕಾಲಕ್ಕೆ ಯಕ್ಷಾರಾಧನೆಯು ಸಾಕಷ್ಟು ಪ್ರಚಲಿತವಾಗಿದ್ದಿತೆಂದು ತೋರುತ್ತದೆ. ಹೈಗುಂದದ ಯಕ್ಷಶಿಲ್ಪವು ಕರ್ಲೆಯಲ್ಲಿ ದೊರೆತಿರುವ ಶಿಲ್ಪದಂತೆಯೇ ಪಶ್ಚಿಮ ದಕ್ಖನ್ನಿನ ಶಿಲ್ಪಕಲಾಶೈಲಿಯಲ್ಲಿದ್ದರೆ, ಸನ್ನತಿಯ ಇಂತಹ ಬಹುಪಾಲು ಶಿಲ್ಪಗಳು ಅಮರಾವತಿಯ ನಂತರದ ಕಲಾಶೈಲಿಯಲ್ಲಿವೆ.

ಪೂರ್ಣಉಬ್ಬಿನಾಕಾರದ ಮಿಥುನ (ದಂಪತಿ) ಶಿಲ್ಪವು ಕರ್ನಾಟಕದಲ್ಲಿ ದೊರೆತ ಶಾತವಾಹನರ ಕಾಲದ ಶಿಲ್ಪಶೈಲಿಯಲ್ಲಿರುವ ಮೊಟ್ಟಮೊದಲನೆಯ ಶಿಲ್ಪವಾಗಿದೆ. ಮಿಥುನಾಕಾರದ ಉಬ್ಬುಶಿಲ್ಪಗಳು ಸಾಮಾನ್ಯವೆನಿಸಿದ್ದರೂ ಈಗ ಸನ್ನತಿಯಲ್ಲಿ ದೊರೆತಿರುವ ಮಿಥುನ ಶಿಲ್ಪವು ಅಪರೂಪದ ಗಮನಾರ್ಹ ಶಿಲ್ಪವೆನಿಸಿದೆ. ಈ ಶಿಲ್ಪವು ಸಹಾ ಬಹುಶಃ ಉಮಾ–ಮಹೇಶ್ವರ ಶಿಲ್ಪದಂತೆಯೇ ದೈವಿಕ ಭಾವನೆಯನ್ನೂ ಉಪಾಸನ ಪದ್ಧತಿಯನ್ನು ಬಿಂಬಿಸುವ ಉದ್ದೇಶದಿಂದ ಕೂಡಿದ್ದಿರಬಹುದೇ ?

(ಕನ್ನಡಾನುವಾದ/ಲಕ್ಷ್ಮಣ್ ತೆಲಗಾವಿ)